ಕೆ.ಎಸ್.ಕುಮಾರಸ್ವಾಮಿ

# ಪ್ರಾಚೀನ ಕರ್ನಾಟಕದಲ್ಲಿ ನಾಣ್ಯಟಂಕನ

ನಾಣ್ಯಗಳನ್ನು ಮುದ್ರಿಸುವುದು ಪ್ರಾಚೀನ ಕಾಲದಲ್ಲಿ ಸರಕಾರದ ಹಿಡಿತದಲ್ಲಿ ಇರಲಿಲ್ಲ. ಸರಕಾರದಿಂದ ಪರವಾನಗಿಯನ್ನು ಪಡೆದ ಖಾಸಗೀ ಸಂಸ್ಥೆಗಳು ಈ ಕಾರ್ಯವನ್ನು ನಿರ್ವಹಿಸುತ್ತಿದ್ದವು. ಸರ್ಕಾರವು ಇವುಗಳ ಮೇಲೆ ಹತೋಟಿಯನ್ನು ಮಾತ್ರ ಇಟ್ಟುಕೊಂಡಿದ್ದಿತು. ನಾಣ್ಯಗಳನ್ನು ಟಂಕಿಸುತ್ತಿದ್ದ ಸ್ಥಳಗಳನ್ನು ಕಮ್ಮಟಗಳೆಂದೂ ಅಚ್ಚಿನ ಟಂಕಸಾಲೆಗಳೆಂದೂ ಕರೆಯುತ್ತಿದ್ದರು. ಸರ್ಕಾರದ ಅಧಿಕಾರಿಯು ಟಂಕಿಸಲ್ಪಟ್ಟ ನಾಣ್ಯಗಳನ್ನು ಪರೀಕ್ಷಿಸಿ ರುಜುವಾತು ಪಡಿಸುತ್ತಿದ್ದನು.[1] ಅನಂತರ ಅವುಗಳನ್ನು ಚಲಾವಣೆಗೆ ಬಿಡುತ್ತಿದ್ದರು. ಚಿನ್ನದ, ಬೆಳ್ಳಿಯ, ತಾಮ್ರದ ನಾಣ್ಯಗಳನ್ನು ಕಮ್ಮಟದಲ್ಲಿ ಟಂಕಿಸುತ್ತಿದ್ದರು.

ಅತಿಹೆಚ್ಚು ಬೆಲೆಬಾಳುವ ಚಿನ್ನದ ನಾಣ್ಯಗಳನ್ನು ನಿಖರವಾಗಿಯೂ ನಿರ್ದಿಷ್ಟವಾಗಿಯೂ, ಟಂಕಿಸಬೇಕಾಗುತ್ತಿದ್ದುದರಿಂದಲೂ, ಅದು ಗುರುತರ ಜವಾಬ್ದಾರಿಯಾಗಿದ್ದುದರಿಂದಲೂ ಚಿನ್ನಬೆಳ್ಳಿಯ ತೂಕಾದಿಗಳಲ್ಲಿ ನಿಷ್ಣಾತರೂ, ಜಾಣರೂ, ವ್ಯವಹಾರಜ್ಞರೂ, ಜವಾಬ್ದಾರಿಯುತರೂ ನಂಬಿಕೆಗೆ ಅರ್ಹರೂ ಆದ ಪ್ರಾಮಾಣಿಕ ವ್ಯಕ್ತಿಗಳನ್ನು ಈ ಕೆಲಸಕ್ಕೆ ನೇಮಿಸ ಲಾಗುತ್ತಿತ್ತು. ಕೆಲವೊಮ್ಮೆ ಶೆಟ್ಟಿಗಳು (ವ್ಯಾಪಾರಿಗಳು) ಈ ಜವಾಬ್ದಾರಿ ನಿರ್ವಹಿಸುತ್ತಿದ್ದರೆಂದು ಶಾಸನಗಳಲ್ಲಿ ಹೇಳಿದ್ದರೂ ಅವರ ಕೆಳಗೆ ಪುನಃಅಕ್ಕಸಾಲಿಗರು ಗೇಣಿಯನ್ನು ತೆಗೆದುಕೊಂಡು ಕೆಲಸಮಾಡುತ್ತಿದ್ದ ರೆನಿಸುತ್ತದೆ.[2] ಇಲ್ಲಿ ಗೇಣಿ ಎಂದರೆ ಒಂದು ರೀತಿಯ ಗುತ್ತಿಗೆ ಒಪ್ಪಂದ (ಕಾಂಟ್ರಾಕ್ಟ್) ವು ಈ ಕಮ್ಮಟದ ಒಡೆಯರಾದ ಶೆಟ್ಟಿಗಳು ಮತ್ತು ನಿಜಕೆಲಸಗಾರರಾದ ಅಕ್ಕಸಾಲಿಗರ ನಡುವೆ ಇರುತ್ತಿತ್ತು. ಎಂದು ಭಾವಿಸಬಹುದು. ಆದರೆ ಕೆಲವು ಕಡೆ ಓಜುಗಳೇ (ಅಕ್ಕಸಾಲಿಗರು) ಕಮ್ಮಟದ ಒಡೆಯರಾಗಿರುತ್ತಿದ್ದರು.

ಡಾ॥ ಎಂ. ಚಿದಾನಂದಮೂರ್ತಿಯವರು ಹೇಳುವಂತೆ ವಿಶ್ವಕರ್ಮರೆಂದು ಕರೆದುಕೊಳ್ಳುವ ಅಕ್ಕಸಾಲಿಗರನ್ನು ರಾಜನು ಕಮ್ಮಟಗಳಲ್ಲಿ ನೇಮಿಸಿ ಕೊಳ್ಳುತ್ತಿದ್ದನು. ಅಕ್ಕಸಾಲಿಗಳು ಅಥವಾ ಕಮ್ಮಟದಓಜುಗಳು ತಾವೇ ಪ್ರತ್ಯೇಕವಾದ ಶ್ರೇಣಿಗಳನ್ನು ಸ್ಥಾಪಿಸಿಕೊಳ್ಳುತ್ತಿದ್ದರು.[3] ಒಂದು ಕಮ್ಮಟಕ್ಕೆ ಒಬ್ಬ ಒಡೆಯನಿರುತ್ತಿದ್ದು ಅವನ ಜೊತೆಯಲ್ಲಿ ಮತ್ತೂ ಕೆಲವು ಓಜುಗಳು ಅಥವಾ ಆಚಾರಿಗಳು ಸಾಂಸ್ಥಿಕವಾಗಿ ದುಡಿಯುತ್ತಿದ್ದರು. ಕಮ್ಮಟವು ಚೆನ್ನಾಗಿ ಬೆಳೆದ ಒಂದು ಸಂಸ್ಥೆಯಾಗಿದ್ದಿತು. ಇಲ್ಲಿ ಮೂರು ರೀತಿಯ ಕೆಲಸ ಮಾಡುತ್ತಿದ್ದರು. ಚಿನ್ನಕ್ಕೆ ಗೊತ್ತಾದ ಆಕಾರವನ್ನು ಕೊಡುತ್ತಿದ್ದ – ಬಿಡಿಗಮ್ಮಟ, ಅದರ ಮೇಲೆ ಕೆಲವರು ಮುದ್ರೆಯನ್ನು ಒತ್ತುತ್ತಿದ್ದರು – ಇದು ಉಂಡಿಗೆಯ ಕಮ್ಮಟ, ಅನಂತರ ನಾಣ್ಯಗಳನ್ನು ಅಂಚನ್ನು ಕತ್ತರಿಸಿ, ಅರದಿಂದ ಉಜ್ಜಿ ಸಮನಾದ ಆಕಾರಗೊಡುತ್ತಿದ್ದ ಕೆಲಸಗಾರರಗುಂಪು– ಸೌಕಟ್ಟುಗಾರರು, ಈ ರೀತಿ ಡಾ॥ ಕುಪ್ಪುಸ್ವಾಮಿಯವರು ಕಮ್ಮಟಗಳಲ್ಲಿ ಮೂರು ರೀತಿಯ ಕೆಲಸವನ್ನು ಗುರುತಿಸಿದ್ದಾರೆ.[4] ಇಂಥ ಕಮ್ಮಟಗಳು ಕರ್ನಾಟಕದ ಲಕ್ಕುಂಡಿ, ಕೊಟ್ಟಿತೊಣೆ, ಬಳ್ಳಿಗಾವೆ, ಸವದಿ ಮೊದಲಾದ ಅನೇಕ ಭಾಗಗಳಲ್ಲಿ ಹರಡಿಕೊಂಡಿದ್ದವು.

ಇಂಥ ಕಮ್ಮಟಗಳಲ್ಲಿ ಹಲವಾರು ಓಜುಗಳು, ಆಚಾರಿಗಳು ದುಡಿದ ಉದಾಹರಣೆಗಳು ಶಾಸನಗಳಲ್ಲುಂಟು. ಹಳೇಬೀಡು ವುಜರೆ ಬಸ್ತಿಹಳ್ಳಿಯ[5] ಜಿನಾಲಯ ಮತ್ತು ಮಲ್ಲಿನಾಥಗುಡಿಗೆ "ಕಂಮಟದೋಜು ಗಳುದಾನವನ್ನು ಬಿಟ್ಟಿದ್ದಾರೆ. ಬೇಲೂರು ತಾ॥ ಮಾದೇನಹಳ್ಳಿಯ[6] ಆಚಾರಿಗಳು ದಾನ ಬಿಟ್ಟಿದ್ದಾರೆ. ಈ ಶಾಸನವನ್ನು ಸೂಕ್ಷ್ಮವಾಗಿ ಗಮನಿಸಿದರೆ ಇಲ್ಲಿ ಕಮ್ಮಟದ ಆಚಾರಿಗಳು ಬಹುಶಃ "ಸಮಕಟ್ಟುಕಾರರುಮಿರ್ದು" – ಎಂದರೆ ಮೇಲೆ ಹೇಳಿದ್ದನ್ನೇ ತಿಳಿಯಬಹುದು. ಅವರು ನಾಣ್ಯಗಳ ಅಂಚನ್ನು ಕತ್ತರಿಸುವವರು, ಎಂದು ಮೇಲೆ ಹೇಳಿದೆ. ಇದೇ ಶಾಸನದಲ್ಲಿ "ಸಾಸಿರಕ್ಕೆ ಹ ಮೊಳೆಗೆ ಗಿಟ್ಟ ಹಾಗ.....ಕೊಡುವರ್" ಎಂದು ಬರುತ್ತದೆ. ಇಲ್ಲಿ 'ಸಾವಿರ ಹ ಮೊಳೆಗೆ' ಎಂದರೆ ಒಂದು ಸಾವಿರಅಚ್ಚಿನಮೊಳೆಗೆ ಪ್ರತೀದಿನವೂ ಒಂದು ಹಾಗದಂತೆ ದೇವರಿಗೆ ಲೆಕ್ಕಹಾಕಿ ದಾನಕೊಡುತ್ತಿದ್ದರು. ಅಂದರೆ, ಒಂದು ದಿನಕ್ಕೆ 1000 ಅಚ್ಚಿನ ಮೊಳೆಯಷ್ಟು ನಾಣ್ಯ ಕೆಲಸ ಮಾಡುತ್ತಿದ್ದರೆಂದು ತಿಳಿಯಬಹುದಾಗಿದೆ? ಅಥವಾ ಅದಕ್ಕಿಂತ ಹೆಚ್ಚು

ಉತ್ಪಾದನೆಯನ್ನು ಮಾಡಿದರೂ ಕೂಡ ಈ ಒಂದು ದರದಲ್ಲಿ ದಾನ ಮಾಡುತ್ತಿದ್ದರೆಂದು ತಿಳಿಯಬಹುದೆ? ಒಟ್ಟಿನಲ್ಲಿ ಇದಕ್ಕಿಂತ ಕಡಿಮೆ ಕೆಲಸವನ್ನಂತೂ ಮಾಡುತ್ತಿರಲಿಲ್ಲವೆನ್ನಿಸುತ್ತದೆ. ಮತ್ತು ಅವರ ಕೆಲಸದ ಪ್ರಮಾಣವನ್ನು ಅಥವಾ ಗಾತ್ರವನ್ನು ಮೊಳೆಯ ಸಂಖ್ಯೆಯ ಮೇಲೆ ನಿರ್ಧರಿಸುತ್ತಿದ್ದರೆನ್ನಿಸುತ್ತದೆ.

ನಾವಿಮೋಜನ ಎರಣಿಗ ಮಾದೋಜನ ಮಗ, ಚಿಕ್ಕ ಮಾದೋಜನು ಬೇಚೋಜನ ಮಗ. ಇವರ ಕಾಲ 1098.[7] ಇವರ ಕಾರ್ಯಕ್ಷೇತ್ರವು ಈಗಿನ ಬಳ್ಳಾರಿ ತಾ॥ನ ಕಂಡಿತಿಸಿ (ಕೊಟ್ಟಿಕೊಣೆ) ಗ್ರಾಮದಲ್ಲಿರುವ ಕುಮಾರ ದೇವಸ್ಥಾನದ ಹಿಂದೆ ಇದ್ದ ಕುಮ್ಮಟ. ಇವರು ಕುಮ್ಮಟದ ಒಡೆಯರಾಗಿದ್ದರು. ಇವರು ಈ ಶಾಸನದಲ್ಲಿ ತಾವು ಲೊಕ್ಕಿಪೊನ್ನನ್ನು ಅದೇ ತೂಕದ "ನವಿಲುಪೊನ್ನಾಗಿ" ಬದಲಾಯಿಸ ಬೇಕೆಂದು ಯೋಚಿಸಿದರು. ಅನಂತರ ಬಂದ ಲಾಭದಲ್ಲಿ ಸ್ವಲ್ಪವನ್ನು ದೇವರಿಗೆ ದಾನ ಬಿಟ್ಟರು. ಅನೇಕ ಅಧಿಕಾರಿಗಳು ಮತ್ತು ಐದು ಜನರ ಸಮುಖದಲ್ಲಿ ಈ ಒಂದು ಒಪ್ಪಂದ ನಡೆಯಿತು. ಈ ಶಾಸನದಬಗ್ಗೆ ಪ್ರೊ॥ ಚಿದಾನಂದಮೂರ್ತಿಯವರು ಹೀಗೆ ಹೇಳುತ್ತಾರೆ. "ಈ ಶಾಸನದ ರೀತಿಯನ್ನು ನೋಡಿದರೆ ಕಮ್ಮಟದ ಅಕ್ಕಸಾಲಿಗಳಿಗೆ ನಾಣ್ಯಗಳನ್ನು ಟಂಕಿಸುವ ಅಧಿಕಾರವನ್ನು ದೇವಸ್ಥಾನವು ಬಿಟ್ಟುಕೊಟ್ಟು, ಅದಕ್ಕೆ ಪ್ರತಿಯಾಗಿ ಅವರಿಂದ ವರ್ಷಕ್ಕೆ ಹನ್ನೆರಡು ಗದ್ಯಾಣ (ಪೊನ್) ಗಳನ್ನು ಪಡೆಯುತ್ತಿದ್ದರೆಂದು ಕಾಣುತ್ತದೆ.[8]

ಉತ್ತಮೋಜ ಎಂಬ ಇದೇ ಉದ್ಯೋಗದ ಒಬ್ಬ ವ್ಯಕ್ತಿಯನ್ನು ಶಾಸನಗಳು ಉಲ್ಲೇಖಿಸುತ್ತದೆ. ಈತನನ್ನು "ತ್ರಿಭುವನಮಲ್ಲದೇವನಕ್ಕಸಾಲಿ ಉತ್ತಮೋಜ" ಎಂದು ಕರೆದಿದೆ. ಇವನ ಬಗ್ಗೆ ಡಾ॥ ಎ.ವಿ. ನರಸಿಂಹಮೂರ್ತಿಯವರು ಹೀಗೆ ಹೇಳುತ್ತಾರೆ. ಈ ಶಾಸನವು ತ್ರಿಭುವನಮಲ್ಲನ ಕಮ್ಮಟಾಧಿಕಾರಿಯಾದ ಅಕ್ಕಸಾಲಿ ಉತ್ತಮೋಜನು ಸೌದಿಗ್ರಾಮದಲ್ಲಿರುವ ಕಮ್ಮಟೇಶ್ವರ ದೇವರಿಗೆ ಬಿಟ್ಟ ದಾನದ ವಿಷಯವನ್ನು ಹೇಳುತ್ತದೆ. ಚಿನ್ನದ ನಾಣ್ಯಗಳು ಮಹಾರಾಜನ ಕಮ್ಮಟದೊಡೆಯನಾದ ಉತ್ತಮೋಜನ ಆದೇಶದ ಮೇರೆಗೆ ಟಂಕಿಸಲ್ಪಡುತ್ತಿದ್ದೆವು ಎಂಬುದು ಸ್ಪಷ್ಟವಾಗುತ್ತದೆ. ಈತನು ಚಿನ್ನದ ನಾಣ್ಯಗಳನ್ನು ಮುದ್ರಿಸಲು ಬೇಕಾದ ಮಹಾರಾಜನ ಮೊಹರನ್ನು ಒಳಗೊಂಡ ಕಮ್ಮಟದ ಆಣೆ (die) ಯನ್ನು ತನ್ನ ಬಳಿ ಇಟ್ಟುಕೊಳ್ಳುವ ವಿಶೇಷ ಸವಲತ್ತನ್ನು ಪಡೆದಿದ್ದನು. ಹಿಂದಿನ ಕಾಲದಲ್ಲಿ ಕೇಂದ್ರ ಮತ್ತು ಸ್ಥಳೀಯ ಅಧಿಕಾರಿಗಳಿಬ್ಬರೂ ನಾಣ್ಯಗಳನ್ನು ಬಿಡುಗಡೆ ಮಾಡುವ ಅಧಿಕಾರವನ್ನು ಹೊಂದಿರುತ್ತಿದ್ದರು. ಅಂತೆಯೇ ಚಾಲುಕ್ಯ ಆರನೆಯ ವಿಕ್ರಮಾದಿತ್ಯ ಮಹಾರಾಜನ ಅಕ್ಕಸಾಲಿಯಾಗಿದ್ದ ಉತ್ತಮೋಜನು ಮಹಾರಾಜನ ಮೊಹರಿನಿಂದ ಕೂಡಿದ ಅಚ್ಚಿನ ಜವಾಬ್ದಾರಿಯನ್ನು ಹೊಂದಿದ್ದನು.

---

## ಟಿಪ್ಪಣಿಗಳು

1. ಕುಪ್ಪುಸ್ವಾಮಿ ಜಿ.ಆರ್, 'ಇಕಾನಾಮಿಕ್ ಕಂಡಿಷನ್ಸ್ ಇನ್ ಕರ್ನಾಟಕ' ಧಾರವಾಡ 1975, ಪು.109.
2. 'ಸೌ.ಇ.ಇ.', XV, ಕ್ರ.62, 1148ರದು.
3. ಚಿದಾನಂದಮೂರ್ತಿ, ಎಂ., ಕನ್ನಡಶಾಸನಗಳ ಸಾಂಸ್ಕೃತಿಕ ಅಧ್ಯಯನ', ಪು.389.
4. ಕುಪ್ಪುಸ್ವಾಮಿ, ಮೇಲಿನದೇ, ಪು.109.
5. 'ಎ.ಕ.' XV, ಬಿ.ಎಲ್. 335, 1138ರದು.
6. 'ಎ.ಕ.'V ಬಿ.ಎಲ್. 188, 1191ರದು.
7. 'ಸೌ.ಇ.ಇ.' IX(1) ನಂ.164, 1098ರದು.
8. ಚಿದಾನಂದಮೂರ್ತಿ, ಮೇಲಿನದೇ, ಪು.389.
9. ನರಸಿಂಹಮೂರ್ತಿ, ಎ.ವಿ., 'ದಿ ಕಾಯಿನ್ಸ್ ಆಫ್ ಕರ್ನಾಟಕ' ಪು.78-79.